



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 23

| ಸಂಪುಟ: ೦೩ ಸಂಚಿಕೆ: ೯ | ಡಿಸೆಂಬರ್ ೨೦೧೬ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 03 Issue 9 | December 2016 | Pages - 8 | A. Sub. - Rs. 20/- | Editor : Sri. B.R. Ravindranath |


ದಿ|| ಪ್ರೊ ಎಂ.ವಿ. ಸೀತಾರಾಮಯ್ಯ
ಸಂಸ್ಥಾಪಕರು

ಪ್ರೊ. ಎಂ. ಎಚ್. ಕೃಷ್ಣಯ್ಯ
ಗೌರವಾಧ್ಯಕ್ಷರು

**ಪದಾಧಿಕಾರಿಗಳು**

ಡಾ|| ಪಿ. ವಿ. ನಾರಾಯಣ
ಅಧ್ಯಕ್ಷರು

ಪ್ರೊ|| ಜಿ. ಅಬ್ದುಲ್ ಬಷೀರ್
ಶ್ರೀ ಬಿ. ಆರ್. ರವೀಂದ್ರನಾಥ್
ಗೌ|| ಕಾರ್ಯದರ್ಶಿಗಳು

ಡಾ|| ಅನಿಲ್ ಕುಮಾರ್
ಕೋಶಾಧಿಕಾರಿ

ಬಿ ಎಂ ಶ್ರೀ ಸ್ಮಾರಕ ಪ್ರತಿಷ್ಠಾನದ ಸಂಯೋಜನಾಧಿಕಾರಿಗಳು

ಪ್ರೊ|| ವಿಜಯಾ ಸುಬ್ಬರಾಜು – ಶಿಕ್ಷಣ ವಿಭಾಗ
ಪ್ರೊ|| ಹೆಚ್. ಶೇಷಗಿರಿ ರಾವ್ – ಹಸ್ತಪ್ರತಿ ವಿಭಾಗ
ಶ್ರೀ ಶ್ರೀನಿವಾಸ ಮೂರ್ತಿ – ಅಂತರಿಕ ಲೆಕ್ಕ ಪರಿಶೋಧನೆ

**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–

ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಅಕ್ಟೋಬರ್2016– ನವೆಂಬರ್2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## ಸರ್.ಸಿ.ವಿ. ರಾಮನ್ ನೆನಪಿನ ವಿಜ್ಞಾನ ಉಪನ್ಯಾಸ



ದಿನಾಂಕ 14–11–2016 ರಂದು ಶ್ರೀಮತಿ ಬಿ.ಜಿ. ಕುಸುಮ ಟ್ರಸ್ಟ್ ದತ್ತಿ ಅಡಿಯಲ್ಲಿ ಹಮ್ಮಿಕೊಳ್ಳಲಾಗಿದ್ದ ಸರ್.ಸಿ.ವಿ. ರಾಮನ್ನೆನಪಿನ ವಿಜ್ಞಾನ ಉಪನ್ಯಾಸವನ್ನು ಡಾ.ಬಿ.ಎಸ್. ಶೈಲಜ, ನಿರ್ದೇಶಕರು, ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು ಅವರು 'ಸೌರವ್ಯೂಹದ ಅಧ್ಯಯನ ಏಕೆ ಬೇಕು' ಎಂಬ ವಿಷಯದ ಬಗ್ಗೆ ಪ್ರಾತ್ಯಕ್ಷಿಕೆ ಸಹಿತವಾಗಿ ಬಹಳ ಆಸಕ್ತಿ ಮೂಡುವಂತೆ ನಡೆಸಿಕೊಟ್ಟರು. ಮೊದಲಿಗೆ ಡಾ. ಪಿ.ವಿ. ನಾರಾಯಣ ಅವರು ದತ್ತಿ ದಾನಿಗಳ ಬಗ್ಗೆ ಹಾಗೂ ಉಪನ್ಯಾಸಕಾರರ ಬಗ್ಗೆ ಪರಿಚಯ ಮಾಡಿಕೊಟ್ಟು ಎಲ್ಲರನ್ನೂ ಸ್ವಾಗತಿಸಿದರು. ಡಾ.ಬಿ.ಎಸ್. ಶೈಲಜ ಅವರು ಸಭಿಕರನ್ನು ಇಡೀ ಸೌರಮಂಡಲದ ಪ್ರವಾಸಕ್ಕೆ ಕರೆದು–ಕೊಂಡು ಹೋಗಿ ಈ ಕ್ಷೇತ್ರದಲ್ಲಿ ನಡೆದಿರುವ ಸಂಶೋಧನೆಗಳ ಬಗ್ಗೆ ತಿಳಿಸಿಕೊಟ್ಟು ಹಾಗೂ ಮಾನವನ ಅರಿವಿಗೆ ಇನ್ನೂ ಬಂದಿಲ್ಲದಿರುವ ವಿಷಯಗಳ ಬಗ್ಗೆಯೂ ಪ್ರಸ್ತಾಪಿಸಿದರು. ರವೀಂದ್ರನಾಥ ವಂದನಾರ್ಪಣೆ ಸಲ್ಲಿಸಿದರು.

### ಪತ್ರಿಕಾ ಪ್ರಕಟಣೆ

ಶ್ರೀಮತಿ ಕಮಲಿನಿ ಬಾಲೂರಾವ್ಅವರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಮೂವತ್ತೈದು ವರ್ಷ ವಯಸ್ಸಿನೊಳಗಿನ ಲೇಖಕರು ಪ್ರಕಟಿಸಿದ ಮೊದಲ ಕೃತಿಗೆ ಪ್ರತಿ ವರ್ಷ ಕೊಡಮಾಡುವ "ಶಾ ಬಾಲೂರಾವ್' ಯುವ ಬರಹಗಾರ ಪ್ರಶಸ್ತಿಗೆ 2015 ವರ್ಷಕ್ಕೆ ಶ್ರೀ ಸತ್ಯಮಂಗಲ ಮಹದೇವ ಅವರ 'ಯಾರ ಹಂಗಿಲ್ಲ ಬೀಸುವ ಗಾಳಿಗೆ ' ಎಂಬ ಕವನ ಸಂಕಲನವನ್ನು ಆಯ್ಕೆ ಸಮಿತಿಯು ಆಯ್ಕೆ ಮಾಡಿದೆ. ಈ ವರ್ಗದಲ್ಲಿ ಒಟ್ಟು 13 ಸಾಹಿತಿಗಳು ಪುಸ್ತಕಗಳನ್ನು ಸಲ್ಲಿಸಿದ್ದರು.

ಅಂತೆಯೇ ಪ್ರತಿ ವರ್ಷ ಬೇರಾವುದೇ ಭಾಷೆಯಿಂದ ಕನ್ನಡಕ್ಕೆ ಅನುವಾದಗೊಂಡ ಅತ್ಯುತ್ತಮ ಅನುವಾದ ಕೃತಿಗೆ ಸಲ್ಲುವ 'ಶಾ ಬಾಲೂರಾವ್ ಅನುವಾದ ಪ್ರಶಸ್ತಿಗೆ ' ಶ್ರೀ ವಸುಧೇಂದ್ರ ಅವರ 'ಎವರೆಸ್ಟ್' ಎಂಬ ಕೃತಿಯನ್ನು ಆಯ್ಕೆ ಸಮಿತಿಯು ಆರಿಸಿದೆ. ಈ ವರ್ಗದಲ್ಲಿ ಒಟ್ಟು 17 ಅನುವಾದಕರು ಪುಸ್ತಕಗಳನ್ನು ಸಲ್ಲಿಸಿದ್ದರು.

ಈ ಎರಡೂ ಪ್ರಶಸ್ತಿಗಳ ಮೌಲ್ಯ ತಲಾ 25,000/–ರೂಗಳಾಗಿದ್ದು, ದಿ. 4–12–2016ರ ಭಾನುವಾರ ಬೆಳಿಗ್ಗೆ 10–30 ಗಂಟೆಗೆ ಪ್ರತಿಷ್ಠಾನದ ಸಭಾಂಗಣದಲ್ಲಿ ನಡೆಯುವ ವಿಶೇಷ ಸಮಾರಂಭದಲ್ಲಿ ಡಾ|| ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ ಅವರು ಪ್ರಶಸ್ತಿಗಳನ್ನು ಪ್ರದಾನ ಮಾಡುವರು.

ಶಾ. ಬಾಲು ರಾವ್ 'ಯುವ ಬರಹಗಾರ ಪ್ರಶಸ್ತಿ'ಯ ತೀರ್ಪುಗಾರರು

1. ಡಾ| ಎಚ್. ಎಲ್. ಪುಷ್ಪ, ಕನ್ನಡ ಪ್ರಾಧ್ಯಾಪಕರು ಹಾಗೂ ಪ್ರಖ್ಯಾತ ಮತ್ತು ವಿಮರ್ಶಕಿ
2. ಡಾ| ಟಿ. ಯಲ್ಲಪ್ಪ ಕನ್ನಡ ಪ್ರಾಧ್ಯಾಪಕರು, ಸ್ನಾತಕೋತ್ತರ ಅಧ್ಯಯನ ವಿಭಾಗ, ಸರ್ಕಾರಿ ಕಾಲೇಜು, ಕೆ.ಆರ್. ಪುರಂ

ಶಾ. ಬಾಲು ರಾವ್'ಅನುವಾದ ಪ್ರಶಸ್ತಿ'ಯ ತೀರ್ಪುಗಾರರು

1. ಶ್ರೀ. ಎಚ್.ಎಸ್. ಸತ್ಯನಾರಾಯಣ, ಕನ್ನಡ ಪ್ರಾಧ್ಯಾಪಕರು ಹಾಗೂ ಖ್ಯಾತ ವಿಮರ್ಶಕರು
2. ಪ್ರೊ| ಎನ್. ಜಿ. ನರಸಿಂಹನ್, ಇಂಗ್ಲಿಷ್ ಪ್ರಾಧ್ಯಾಪಕರು, ವಿಜಯ ಸಂಜೆ ಕಾಲೇಜು, ಬೆಂಗಳೂರು

## ಸಂಪಾದಕೀಯ

ಕಾಳಧನದ ಬಗ್ಗೆ ಸಮರ ಸಾರಿರುವ ಕೇಂದ್ರ ಸರ್ಕಾರದ ಕ್ರಮದಿಂದ ನಮ್ಮ ದೇಶದಲ್ಲಿ ಈಗ ಒಂದು ದೊಡ್ಡ ಕ್ರಾಂತಿಯೇ ನಡೆಯುತ್ತಿದೆ. ಒಂದು ವಿಧದಲ್ಲಿ ಇಂತಹ ಕ್ರಾಂತಿ ನಡೆಯುವ ಕಾಲಘಟ್ಟದಲ್ಲಿ ನಾವೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಭಾಗವಹಿಸುತ್ತಿರುವುದೂ ಒಂದು ಸೌಭಾಗ್ಯವೇ ಸರಿ. ಯಾವುದೇ ಕ್ರಾಂತಿ ನಡೆಯಲು ಪರಿಸ್ಥಿತಿ ವಿಪರೀತವಾಗಿ ಹದಗೆಟ್ಟಿರಬೇಕು ಎಂಬುದಂತೂ ನಿಜ. ಜೊತೆಗೆ ಕ್ರಾಂತಿ ನಡೆಯುವ ಅವಧಿಯಲ್ಲಿ ಬಹಳಷ್ಟು ಅಮಾಯಕ ಜನರಿಗೆ ತೊಂದರೆ–ಯುಂಟಾಗುತ್ತದೆ. ಕ್ರಾಂತಿಯಿಂದ ದೀರ್ಘಕಾಲೀನ ಲಾಭಗಳನ್ನು ಪಡೆಯಲು ಇಂತಹ ತ್ಯಾಗಕ್ಕೆ ಎಲ್ಲರೂ ಸಿದ್ದರಾಗಿರಬೇಕು.

ಆದರೆ ಈ ರೀತಿಯ ವಿಪರೀತ ಪರಿಸ್ಥಿತಿಗೆ ನಾವು ತಲುಪಿದ್ದು ಶೋಚನೀಯ. ಕಾಳಧನದ ನಿರ್ಮೂಲನೆಗಾಗಿ ಇಡೀ ದೇಶದ ಆರ್ಥಿಕ ಪರಿಸ್ಥಿತಿಯನ್ನು ಸ್ವಚ್ಚಗೊಳಿಸುವಂತಹ ಕ್ರಮವನ್ನು ಕೈಗೊಳ್ಳಬೇಕಾದ ಹಂತ ನಿರ್ಮಾಣಗೊಳ್ಳುವದರಲ್ಲಿ ನಮ್ಮ ನಿಮ್ಮೆಲ್ಲರ ಪಾತ್ರ ಎಷ್ಟು ಎಂಬುದರ ಬಗ್ಗೆ ನಮ್ಮನ್ನೇ ಪ್ರಶ್ನಿಸಿಕೊಳ್ಳಬೇಕಾಗಿದೆ. ಕಾಳಧನದ ಬಗ್ಗೆ ಜನರ ಸಂವೇದನೆಗಳನ್ನು ಎಚ್ಚರಗೊಳಿಸುವಲ್ಲಿ ನಮ್ಮ ಸಮಾಜ ವಿಫಲಗೊಂಡಿದೆ ಎಂದೇ ತಿಳಿಯಬೇಕಾಗಿದೆ. ದೈನಂದಿನ ವ್ಯವಹಾರಗಳಲ್ಲಿ ಹಲವಾರು ರೀತಿಯಲ್ಲಿ ನಾಗರೀಕರು ಜಾಗೃತರಾಗಿ ವ್ಯವಹರಿಸುವ ಪರಿಪಾಠಗಳನ್ನು ಬೆಳೆಸಿಕೊಂಡು ಬಂದಿದ್ದಲ್ಲಿ, ಹಾಗೆ ಬೆಳೆಸಿಕೊಂಡು ಬರಲು ಸಮಾಜವು ನಿರಂತರವಾಗಿ ನೆರವಾಗುತ್ತಿದ್ದಲ್ಲಿ, ಕಾಳಧನದ ಕಾರಣದಿಂದ ದೇಶದ ಪ್ರಜೆಗಳಿಗೆ ದೀರ್ಘಾವಧಿಯಲ್ಲಿ ಎಷ್ಟೆಷ್ಟು ರೀತಿಗಳಲ್ಲಿ ನಷ್ಟಗಳು ಹಾಗೂ ತೊಂದರೆಗಳು ಉಂಟಾಗುತ್ತವೆ ಎಂಬುದನ್ನು ಕಾಲಕಾಲಕ್ಕೆ ಎಚ್ಚರಿಕೆಗಳನ್ನು ನೀಡುತ್ತಾ ಬಂದಿದ್ದಲ್ಲಿ ಈಗ ಕೈಗೊಂಡಿರುವ ಉಗ್ರಕ್ರಮಗಳು ಅಗತ್ಯವಾಗುತ್ತಿರಲಿಲ್ಲ. ಈಗಂತೂ ಈ ನಿಟ್ಟಿನಲ್ಲಿ ಕ್ರಮಗಳನ್ನು ಅನುಷ್ಠಾನಗೊಳಿಸಲಾಗಿದೆ. ಇದರಿಂದ ಬರುವ ನೋವುಗಳನ್ನು ಸಹಿಸಿಕೊಳ್ಳೋಣ ಹಾಗೂ ಇದರಿಂದ ಲಭ್ಯವಾಗುವ ಅನುಕೂಲತೆಗಳನ್ನು ಮತ್ತು ಲಾಭಗಳನ್ನು ಜತನದಿಂದ ಕಾಪಾಡಿಕೊಂಡು ಬರಲು ನಾವೆಲ್ಲರೂ ಎಚ್ಚರಿಕೆ ವಹಿಸಬೇಕಾಗುತ್ತದೆ. ಆದ್ದರಿಂದ ಬುದ್ದಿಜೀವಿಗಳು ಕಾಳಧನದಿಂದ ಜನಸಾಮಾನ್ಯರ ಮೇಲೆ ಉಂಟಾಗುವ ದುಷ್ಪರಿಣಾಮಗಳ ಗಮನ ಹರಿಸಿ ಜನರಿಗೆ ಅದರಲ್ಲಿ ಸೂಕ್ಷ್ಮತೆಗಳನ್ನು ವಿವರಿಸುವಷ್ಟು ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕಾದ ಅಗತ್ಯ ಕಂಡುಬರುತ್ತಿದೆ.

ನಮ್ಮ ನಾಡಿನ ಸಾಹಿತ್ಯದಲ್ಲಿ ಈ ರೀತಿಯ ವಿಚಾರಗಳ ಬಗ್ಗೆ ಗಮನ ಹರಿಸಿರುವುದು ಬಹಳ ಕಡಿಮೆ. ಇಂತಹ ವಿಚಾರಗಳನ್ನು ಒಳಗೊಂಡ ಸಾಹಿತ್ಯವನ್ನು ರಚಿಸುವ ಗೊಡವೆ ನಮಗೇಕೆ ಎಂಬ ಧೋರಣೆಯನ್ನು ಬಹುತೇಕ ಬುದ್ದಿಜೀವಿಗಳು ತಳೆದಿರುವುದರಿಂದಲೇ ಬಹುಷಃ ನಮ್ಮ ಸಮಾಜದಲ್ಲಿ ಇಂತಹ ಸಮಾಜಘಾತಕ ಪಿಡುಗುಗಳು ರಾರಾಜಿಸುತ್ತಿವೆ ಎಂದರೆ ತಪ್ಪಾಗಲಾರದು.ನಮ್ಮ ಸಾಹಿತ್ಯವನ್ನು ರಚಿಸುವಲ್ಲಿ ಈ ಬಗ್ಗೆಯೂ ಚಿಂತನೆ ಮಾಡಿದಲ್ಲಿ ಎಲ್ಲರಿಗೂ ಒಳಿತಾಗುತ್ತದೆ.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು.......

## ಪತ್ರಿಕಾ ಪ್ರಕಟಣೆ

## 2015ನೇ ಸಾಲಿನ ಸಾರಂಗಿ ವೆಂಕಟರಾಮಯ್ಯ–ಪುಟ್ಟಚ್ಚಮ್ಮ ಸ್ಮಾರಕ ದತ್ತಿ ಸ್ಪರ್ಧೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಶ್ರೀಎಸ್.ವಿ. ಶ್ರೀನಿವಾಸರಾವ್ ಅವರು ಸ್ಥಾಪಿಸಿರುವ ದಿ॥ ಸಾರಂಗಿ ವೆಂಕಟರಾಮಯ್ಯ–ಪುಟ್ಟಚ್ಚಮ್ಮ ದತ್ತಿ ನಿಧಿ ಪ್ರಶಸ್ತಿಯಡಿ 2015ನೇ ಸಾಲಿನ ದತ್ತಿ ಸ್ಪರ್ಧೆಗೆ 2015ನೇ ಸಾಲಿನಲ್ಲಿ ಪ್ರಥಮ ಮುದ್ರಣವಾಗಿ ಪ್ರಕಟಗೊಂಡಿರುವ ಸಾಮಾಜಿಕ ನಾಟಕವನ್ನು ಆಹ್ವಾನಿಸಲಾಗಿದೆ.ನಾಟಕದ 2 ಪ್ರತಿಗಳನ್ನು ದಿನಾಂಕ 15, ಡಿಸೆಂಬರ್, 2016ರೊಳಗೆ ಮೇಲ್ಕಂಡ ವಿಳಾಸಕ್ಕೆ ಕಳುಹಿಸಲು ಕೋರಿಕೆ.

ಪ್ರಶಸ್ತಿಯ ಮೊತ್ತ 3,000/–ರೂ.ಗಳು ಹಾಗೂ ಪ್ರಶಸ್ತಿ ಪತ್ರವನ್ನು ವಿಶೇಷ ಸಮಾರಂಭದಲ್ಲಿ ವಿತರಿಸಲಾಗುವುದು.

## ಪತ್ರಿಕಾ ಪ್ರಕಟಣೆ

## 'ಚಿತ್ರಸಾಹಿತ್ಯ' ಡಿಪ್ಲೊಮ

ಕನ್ನಡದಲ್ಲಿ ಈಗ ಚಲನಚಿತ್ರ ಸಾಹಿತ್ಯ ವಿಶಾಲ ವ್ಯಾಪ್ತಿಯನ್ನು ಪಡೆಯುತ್ತಿದ್ದು 'ಕನ್ನಡ ಇನ್ನೂ ಅನ್ನ ಕೊಡುವ ಭಾಷೆಯಾಗಿದೆ' ಎನ್ನುವುದನ್ನು ರುಜುವಾತುಪಡಿಸಿದೆ. ಚಲನಚಿತ್ರ, ಕಿರುತೆರೆ, ಸಾಕ್ಷ್ಯಚಿತ್ರ, ಜಾಹಿರಾತು – ಹೀಗೆ ಹಲವು ಕ್ಷೇತ್ರಗಳ ಸಾಹಿತ್ಯ ವಿಭಾಗವು ಸಾವಿರಾರು ಜನರಿಗೆ ಜೀವನೋಪಾಯವನ್ನು ಕಲ್ಪಿಸಿವೆ. ಕನ್ನಡದಲ್ಲೀಗ ವರ್ಷಕ್ಕೆ 150ಕ್ಕೂ ಹೆಚ್ಚು ಚಲನಚಿತ್ರಗಳು ನಿರ್ಮಾಣವಾಗುತ್ತಿದ್ದು, ಎಂಬತ್ತು ಕಿರುತೆರೆ ಧಾರಾವಾಹಿಗಳೂ ಪ್ರಸಾರವಾಗುತ್ತಿವೆ. ಅಲ್ಲದೆ ಇನ್ನೂ ಹಲವು ವಾಹಿನಿಗಳು ಕಾರ್ಯಾರಂಭ ಮಾಡಲಿದ್ದು ಅಲ್ಲೆಲ್ಲಾ ಚಿತ್ರ ಸಾಹಿತ್ಯಕ್ಕೆ ಬೇಡಿಕೆ ಇದ್ದೇ ಇದೆ. ಇದಲ್ಲದೆ ಎಫ್.ಎಂ.ಕೇಂದ್ರಗಳು, ಸಾಮಾಜಿಕ ಜಾಲತಾಣಗಳು, ರಿಯಾಲಿಟಿ ಶೋಗಳು, ಕಾರ್ಪೋರೇಟ್ ಸಂಸ್ಥೆಗಳು ಎಲ್ಲೆಡೆ ಇಂದು ಹೊಸ ಬಗೆಯ ಬರಹಗಾರರಿಗೆ ಅವಕಾಶಗಳಿವೆ. ಆದರೆ ಅನೇಕ ಆಸಕ್ತ ಪ್ರತಿಭಾವಂತರು ಹೊಸ ಅವಕಾಶಗಳ ಅರಿವಿಲ್ಲದೆ ಅಥವಾ ಮಾಧ್ಯಮದ ಅಗತ್ಯಕ್ಕೆ ಹೊಂದಿಕೊಳ್ಳಲಾಗದೆ ಅವಕಾಶ ವಂಚಿತರಾಗುತ್ತಿದ್ದಾರೆ.

ಈ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಚಿತ್ರಕಥೆ, ಸಂಭಾಷಣೆ, ಕಿರುತೆರೆ, ಸಾಕ್ಷಚಿತ್ರಗಳ ಸಾಹಿತ್ಯ ರಚನೆ, ಚಿತ್ರಗೀತೆಗಳ ರಚನೆ ಸೇರಿದಂತೆ 'ಚಿತ್ರಸಾಹಿತ್ಯ'ವನ್ನು ಕುರಿತು ಸಮಗ್ರ ತರಬೇತಿ ನೀಡುವ ಡಿಪ್ಲೊಮ ಕೋರ್ಸ್ ಒಂದನ್ನು ರೂಪಿಸಿದ್ದು. ಈ ಕ್ಷೇತ್ರದಲ್ಲಿ ಹಿರಿಯ ತಜ್ಞರುಗಳಾದ ಗಿರೀಶ್ ಕಾಸರವಳ್ಳಿ, ಟಿ.ಎಸ್.ನಾಗಾಭರಣ, ಪಿ.ಶೇಷಾದ್ರಿ, ಎನ್.ವಿದ್ಯಾಶಂಕರ್ ಮೊದಲಾದ ವಿವಿಧ ಕ್ಷೇತ್ರಗಳ ಪರಿಣತರು ವಿಶೇಷ ತರಬೇತಿ ನೀಡಲಿದ್ದು ವೀರಪ್ಪ ಮರಳವಾಡಿ, ಶ್ರೀಪತಿ ಮಂಜಿನಬೈಲು, ಎನ್.ಎಸ್.ಶ್ರೀಧರ ಮೂರ್ತಿ ಈ ಕೋರ್ಸ್‌ನ ಹೊಣೆಗಾರಿಕೆ ನಿರ್ವಹಿಸಲಿದ್ದಾರೆ. ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಹತ್ವದ ಕೊಡುಗೆ ನೀಡಿರುವ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು 'ಚಿತ್ರಸಾಹಿತ್ಯ' ಕುರಿತ ವಿಶೇಷ ಡಿಪ್ಲೊಮ ಕೋರ್ಸ್ ಒಂದನ್ನು ರೂಪಿಸಿದ್ದು, ಅಕಾಡಮಿಕ್ ಆಗಿ ಈ ಹೊಸ ಬಗೆಯ ಸಾಹಿತ್ಯವನ್ನು ಗುರುತಿಸಿದ ಮೊದಲ ಪ್ರಯತ್ನವಾಗಿದೆ.

1979 ರಲ್ಲಿ ಪ್ರೊ| ಎಂ.ವಿ. ಸೀತಾರಾಮಯ್ಯನವರು ಸ್ಥಾಪಿಸಿ, 80 ರಲ್ಲಿ ಶ್ರೀ ಕುವೆಂಪು ಅವರಿಂದ ಉದ್ಘಾಟನೆಗೊಂಡ ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನವು ಮೂವತ್ತೇಳು ವರ್ಷಗಳಿಂದ ಸಂಶೋಧನೆ ಮತ್ತು ವಿದ್ವತ್ತುಗಳ ಬಗ್ಗೆ ಹೆಚ್ಚಿನ ಒತ್ತು ನೀಡುತ್ತಿದ್ದು, ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದ ಸಂಶೋಧನ ಸಂಸ್ಥೆಯಾಗಿ ಕನ್ನಡ ಎಂ.ಫಿ.ಲ್ ತರಗತಿಗಳನ್ನು ನಡೆಸುತ್ತಲೂ ಪಿಎಚ್.ಡಿ ಅಭ್ಯರ್ಥಿಗಳಿಗೆ ಮಾರ್ಗದರ್ಶನವನ್ನು ಒದಗಿಸುತ್ತಲೂ ಇರುವುದಲ್ಲದೆ, ಸುಸಜ್ಜಿತ ಗ್ರಂಥಭಂಡಾರ ಹಾಗೂ ಒಂದು ಸಾವಿರಕ್ಕೂ ಹೆಚ್ಚಿನ ಓಲೆಗರಿ ಕಟ್ಟುಗಳ ಸಂರಕ್ಷಣೆ ಮತ್ತು ಡಿಜಿಟಲೀಕರಣ ಕಾರ್ಯಗಳನ್ನು ನಡೆಸುತ್ತ, 'ಕರ್ನಾಟಕ ಲೋಚನ' ಎಂಬ ಆರು ತಿಂಗಳ ವಿದ್ವತ್ ಪತ್ರಿಕೆ, 'ಹೊಂಗನಸು' ಹೆಸರಿನ ಪ್ರತಿ ತಿಂಗಳ ವಾರ್ತಾಪತ್ರಿಕೆ ಹಾಗೂ ನೂರಾರು ಮೌಲಿಕ ಗ್ರಂಥಗಳನ್ನು ಹೊರತರುತ್ತ, ಪ್ರತಿ ತಿಂಗಳೂ ಕನಿಷ್ಠ ಆರು ಸಾಹಿತ್ಯಿಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತ ಕ್ರಿಯಾಶೀಲವಾಗಿದೆ. ಇದೀಗ 'ಚಿತ್ರಸಾಹಿತ್ಯ' ಡಿಪ್ಲೊಮ ಆಯೋಜಿಸಿ ಹೊಸ ಬರವಣಿಗೆಯ ಕಡೆಗೂ ಗಮನ ಹರಿಸುವ ಐತಿಹಾಸಿಕ ಪ್ರಯತ್ನ ಮಾಡುತ್ತಿದೆ. ಪ್ರತಿಷ್ಠಾನದ ಮೂರು ಮಹಡಿಗಳ ಸ್ವಂತ ಕಟ್ಟಡದಲ್ಲಿ ತರಗತಿ ಕೊಠಡಿಗಳು ಹಾಗೂ ಸುಸಜ್ಜಿತ ಸಭಾಂಗಣವೊಂದಿದ್ದು ಈ ಹೊಸ ಪ್ರಯತ್ನವನ್ನು ನಿರ್ವಹಿಸಲು ಸಜ್ಜಾಗಿದೆ. ಮುಖ್ಯವಾಗಿ ಕನ್ನಡ ಬರವಣಿಗೆಯಲ್ಲಿ ಆಸಕ್ತ ವಿದ್ಯಾರ್ಥಿಗಳ ಅಗತ್ಯವನ್ನು ಗಮನದಲ್ಲಿರಿಸಿಕೊಂಡಿರುವ ಈ ಕೋರ್ಸ್ ನಾಲ್ಕು ತಿಂಗಳಿನ ಅವಧಿಯದಾಗಿದ್ದು ಕಾರ್ಯಶೀಲ ಯುವಜನತೆಗೆ ಅನುಕೂಲವಾಗುವಂತೆ ತರಗತಿಗಳು ಸಂಜೆಯ ವೇಳೆ ನಡೆಯುತ್ತವೆ.

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ: ದೂರವಾಣಿ: 080–26615877 / 26636773

# ಡಿಸೆಂಬರ್ 2016 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ




### 4–12–2016 ಭಾನುವಾರ ಬೆಳಿಗ್ಗೆ 10–30ಕ್ಕೆ

ಶಾ ಬಾಲೂರಾವ್ ಅನುವಾದ ಮತ್ತು ಯುವ ಬರಹಗಾರ ಪ್ರಶಸ್ತಿ ಪ್ರದಾನ

ಹಾಗೂ

'ಲಿಫ್ಟ್' ಸೌಕರ್ಯದ ಉದ್ಘಾಟನೆ

ಲಿಫ್ಟ್ ಸೌಕರ್ಯದ ಉದ್ಘಾಟನೆ : ಶ್ರೀಮತಿ ಕಮಲಿನಿ ಶಾ. ಬಾಲೂರಾವ್

ಪ್ರಶಸ್ತಿ ಪ್ರದಾನ ಹಾಗೂಅಧ್ಯಕ್ಷತೆ : ಡಾ.ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

ಪ್ರಶಸ್ತಿ ಪುರಸ್ಕೃತರು

ಯುವಬಹರಗಾರ ಪ್ರಶಸ್ತಿ : ಶ್ರೀ ಸತ್ಯಮಂಗಲಮಹಾದೇವ

ಅನುವಾದ ಪ್ರಶಸ್ತಿ : ಶ್ರೀ ವಸುಧೇಂದ್ರ

ಕೃತಿ ಪರಿಚಯ:

1. ಶ್ರೀ ಸತ್ಯಮಂಗಲಮಹಾದೇವ ಅವರ ಕೃತಿ :ಯಾರ ಹಂಗಿಲ್ಲ ಬೀಸುವ ಗಾಳಿಗೆ : ಡಾ : ಟಿ. ಯಲ್ಲಪ್ಪ
2. ಶ್ರೀ ವಸುಧೇಂದ್ರ ಅನುವಾದಿಸಿರುವ ಎವರೆಸ್ಟ್ : ಶ್ರೀ ಎಚ್. ಎಸ್. ಸತ್ಯನಾರಾಯಣ



### 7–12–2016 ಬುಧವಾರ ಸಂಜೆ–6–00

ಗಮಕವಾಹಿನಿ–11

ನರಹರಿಕವಿಯ 'ತೊರವೆ ರಾಮಾಯಣ'ದಲ್ಲಿ ಮುದ್ರಿಕಾ ಪ್ರದಾನ ಗಮಕರೂಪಕ

ಶ್ರೀ ವಾಗ್ದೇವಿ ಗಮಕ ಕಲಾಪರಿಷತ್ತು

ನಡೆಸಿಕೊಡುವವರು– ಸಿರಿ, ಸಿಂಚನ, ಗೌರಿ, ಶರಧಿ, ಕೃಷ್ಣ ಪ್ರಸಾದ್

ನೇತೃತ್ವ– ಶ್ರೀಮತಿ ಸಿ.ವಿ. ಶ್ರೀಮತಿ

### 14–12–2016 ಬುಧವಾರ ಸಂಜೆ : 6–00 ಗಂಟೆಗೆ



ಕನ್ನಡ ಸಂಸ್ಕೃತಿ ದರ್ಶನ:

ಸಾಕ್ಷ್ಯ ಚಿತ್ರ ಪ್ರದರ್ಶನ



### 24–12–2016 ಶನಿವಾರ ಸಂಜೆ 6 ಗಂಟೆಗೆ

ರಂಗಸಂವಾದ–5

ನಾಟಕ : ಪೋಷಕರೇ ಎಚ್ಚರ

ಅಮೋಘ"100 ನೇ" ಪ್ರದರ್ಶನ

ರಚನೆ ಮತ್ತು ನಿರ್ದೇಶನ: ವಿಜಯ.ಎ

### 20–12–2016 ಮಂಗಳವಾರ ಸಂಜೆ 6 ಗಂಟೆಗೆ



ಅಕ್ಕರಗೊಟ್ಟಿ

ಚಾಲನೆ: ಶ್ರೀ ಶ್ರೀನಿವಾಸ ಮೂರ್ತಿ

ವಿಷಯ : ವ್ಯಾಸ ಮತ್ತು ಮಹಾಭಾರತ



### 28–12–2016 ಬುಧವಾರ ಸಂಜೆ 6 ಗಂಟೆಗೆ

ಬೇಟೆರಾಯದೀಕ್ಷಿತ್

ಬಿ.ಎಸ್. ಸಣ್ಣಯ್ಯ ಮತ್ತು ಇತರ ದತ್ತಿಗಳು

ಉಪನ್ಯಾಸಕರು : ಶ್ರೀ ಎಚ್.ಎಸ್. ಸತ್ಯನಾರಾಯಣ

ವಿಷಯ : ತೇಜಸ್ವಿ : ಕನ್ನಡದ ಸಂಯೋಜಕ ಪ್ರತಿಭೆ

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಸೆಪ್ಟೆಂಬರ್ – ಅಕ್ಟೋಬರ್ 2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## "ರಂಗ ಸಂವಾದ" ಕನ್ನಡಕ್ಕೊಬ್ಬನೇ ಕೈಲಾಸಂ. ಶ್ರೀಧರ್' –ಏಕ ವ್ಯಕ್ತಿ ಪ್ರದರ್ಶನ



ಪ್ರತಿ ತಿಂಗಳೂ ಕೊನೆಯ ಶನಿವಾರ ಸಂಜೆ ನಡೆಯುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಡೆಸಲಾಗುವ "ರಂಗ ಸಂವಾದ" ಕಾರ್ಯಕ್ರಮದಲ್ಲಿ ಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುವ ನಾಟಕಗಳ ಪ್ರದರ್ಶನ ಮಾಡಲಾಗುತ್ತದೆ.22ನೇ ಅಕ್ಟೋಬರ್ 2016 ರಂದು ಈ ಮಾಲೆಯ ಅಡಿಯಲ್ಲಿ ಶ್ರೀ ಶ್ರೀಧರ್ ಅವರು ಕನ್ನಡಕ್ಕೊಬ್ಬನೇ ಕೈಲಾಸಂ ಬಗ್ಗೆ ಏಕ ವ್ಯಕ್ತಿ ಪ್ರದರ್ಶನ ಬಹಳ ಅದ್ಭುತವಾಗಿ ನಡೆಸಿಕೊಟ್ಟರು. ಈ ಪ್ರದರ್ಶನವನ್ನು ವೀಕ್ಷಿಸಿ ಕೈಲಾಸಂ ಅವರ ಜೀವನದ ತಿಳಿದುಕೊಳ್ಳಲು ಬಹಳ ಹೆಚ್ಚಿನ ಸಂಖ್ಯೆಯಲ್ಲಿ ಆಸಕ್ತರು ಹಾಗೂ ಕೈಲಾಸಂ ಅವರ ಅಭಿಮಾನಿಗಳು ನೆರೆದಿದ್ದರು.

## ಗಮಕವಾಹಿನಿ–10 ಕಾವ್ಯಾಂತ್ಯಕ್ಷರಿ



ಪ್ರತಿ ತಿಂಗಳ ಮೊದಲ ಬುಧವಾರ ನಡೆಯುವ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮವಾದ ಗಮಕವಾಹಿನಿ ಅಡಿಯಲ್ಲಿ "ಕಾವ್ಯಾಂತ್ಯಕ್ಷರಿ" ಕಾರ್ಯಕ್ರಮವನ್ನು ಅರ್ಪಿತಾ, ದ್ಯುತಿ, ರಕ್ಷಿತಾ, ಸ್ನಿಗ್ಧ, ಶಾರ್ವರಿ, ರಜತ. ಅಭಿರಾಂ, ಭರತಮಣಿ ಹಾಗೂ ಕಾವ್ಯ ಅವರುಗಳು ಶ್ರೀಮತಿ ಸಿ.ವಿ.ಶ್ರೀಮತಿ ಅವರ ನೇತೃತ್ವದಲ್ಲಿ 2–11–2016ರಂದು ನಡೆಸಿಕೊಟ್ಟರು.

## ಕೃತಿ–ಚಿತ್ರ –6, (ಸಾಹಿತ್ಯ ಕೃತಿ ಆಧಾರಿತ ಚಲನ ಚಿತ್ರ ಪ್ರದರ್ಶನ) ಡಾ. ದೊಡ್ಡೇರಿ ವೆಂಕಟಗಿರಿರಾವ್ ಅವರ ಕಾದಂಬರಿ ಆಧಾರಿತ ಇಷ್ಟಕಾಮ್ಯ ಚಲನ ಚಿತ್ರ ಪ್ರದರ್ಶನ




ದಿನಾಂಕ 13–11–2016ರಂದು ಬಿ.ಎಂ.ಶ್ರೀ ಪ್ರತಿಷ್ಠಾನ ಹಮ್ಮಿಕೊಂಡಿದ್ದ ಸಾಹಿತ್ಯಾಧಾರಿತ ಚಲನಚಿತ್ರಗಳ ಪ್ರದರ್ಶನ ಹಾಗೂ ಚರ್ಚೆಯ ಆರನೆಯ ಕಂತು ಕೃತಿ ಚಿತ್ರ 6 ರಲ್ಲಿ ಖ್ಯಾತ ನಿರ್ದೇಶಕ ಶ್ರೀ ನಾಗತಿಹಳ್ಳಿ ಚಂದ್ರಶೇಖರ್ ಅವರು ನಿರ್ದೇಶಿಸಿದ ಡಾ.ದೊಡ್ಡೇರಿ ವೆಂಕಟಗಿರಿರಾವ್‌ಅವರ ಕಾದಂಬರಿ ಆಧಾರಿತ ಇಷ್ಟಕಾಮ್ಯ ಚಲನಚಿತ್ರವನ್ನು ಪ್ರದರ್ಶಿಸಲಾಯಿತು. ಮೊದಲಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರು ಡಾ. ಪಿ.ವಿ. ನಾರಾಯಣ ಅವರು ಸ್ವಾಗತ ಕೋರಿದರು. ಪತ್ರಕರ್ತ ಶ್ರೀ ಎನ್.ಎಸ್. ಶ್ರೀಧರಮೂರ್ತಿ ಪ್ರಾಸ್ತಾವಿಕ ನುಡಿಗಳನ್ನು ಆಡಿ ಈ ಮಾಲಿಕೆಯ ಆಶಯವನ್ನು ವಿವರಿಸಿ ಅತಿಥಿಗಳ ಪರಿಚಯ ಮಾಡಿಕೊಟ್ಟರು. ಈ ಚಲನಚಿತ್ರದ ನಿರ್ದೇಶಕರಾದ ಶ್ರೀ ನಾಗತಿಹಳ್ಳಿ ಚಂದ್ರಶೇಖರ್ ಅವರು ಈ ಚಲನಚಿತ್ರದ ಬಗ್ಗೆ, ಹಾಗೂ ತಮ್ಮ ಚಲನ ಚಿತ್ರ ನಿರ್ದೇಶನ ಹಾಗೂ ನಿರ್ಮಾಣಗಳಿಗೆ ಸಂಬಂಧಿಸಿದಂತೆ ತಮ್ಮ ಅನುಭವಗಳು ಬಗ್ಗೆ ಹಲವು ವಿಚಾರಗಳನ್ನು ವಿವರಿಸಿದರು.ಶ್ರೀ ಕೆ.ಎಸ್ ರಾಜಾರಾಂ ಅವರು ಡಾ.ದೊಡ್ಡೇರಿ ವೆಂಕಟಗಿರಿರಾವ್ ಅವರ ಪರಿಚಯ ಮಾಡಿಕೊಟ್ಟರು. ಗೌರವ ಕಾರ್ಯದರ್ಶಿ ರವೀಂದ್ರನಾಥ ವಂದಾನಾರ್ಪಣೆ ಮಾಡಿದರು. ಕಾರ್ಯಕ್ರಮವು ಭೋಜನದೊಂದಿಗೆ ಮುಕ್ತಾಯವಾಯಿತು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ದಿನಾಂಕ 18ನೇ ನವೆಂಬರ್ 2016 ರಂದು ಡಾ.ಎಂಎಂ ಕಲಬುರ್ಗಿ ಹಾಗೂ ಡಾ.ಎಂ.ಗೋಪಾಲಕೃಷ್ಣ ಅಡಿಗ ಅವರ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.ಡಾ. ಎಂಎಂ ಕಲಬುರ್ಗಿ ಅವರು ನವೆಂಬರ್ ತಿಂಗಳಿನಲ್ಲಿ ಜನಿಸಿದ್ದರು ಹಾಗೂ ಡಾ.ಎಂ.ಗೋಪಾಲಕೃಷ್ಣ ಅಡಿಗ ಅವರು ನಿಧರಾದರು. ಅವರ ನೆನಪಿನಲ್ಲಿ ಈ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

## ಅಭಿನಂದನೆಗಳು

ತುಳು ಭಾಷೆ ಸಾಹಿತ್ಯ ಸಂಸ್ಕೃತಿಗೆ ಗಣನೀಯವಾದ ಕೊಡುಗೆ ನೀಡಿದವರಿಗೆ ಪ್ರತಿ ವರ್ಷ ಬೆಂಗಳೂರಿನ ತುಳುವೆರೆಂಕುಲು(ರಿ) ಸಂಘಟನೆಯು ಬಲಿಯೇಂದ್ರ ಪುರಸ್ಕಾರ ವನ್ನು ನೀಡುತ್ತಿದ್ದು ,ಈ ವರ್ಷದ ಬಲಿಯೇಂದ್ರ ಪುರಸ್ಕಾರ– 2016 ನ್ನು ಖ್ಯಾತ ಸಂಶೋಧಕಿ ತುಳು ಸಂಸ್ಕೃತಿ ಬಗ್ಗೆ ಅಧ್ಯಯನ ಮಾಡಿ ಎರಡು ಡಾಕ್ಟರೇಟ್ ಪದವಿಗಳನ್ನು ಪಡೆದಿರುವ ನೆಲಮಂಗಲ ಸರಕಾರಿ ಪದವಿ ಪೂರ್ವ ಕಾಲೇಜಿನ ಕನ್ನಡ ಉಪನ್ಯಾಸಕರಾದ ಹಾಗೂ ಬಿ. ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸದಸ್ಯರಾದ ಡಾ.ಲಕ್ಷ್ಮೀ ಜಿ ಪ್ರಸಾದ ಅವರಿಗೆ ನೀಡಿ ಗೌರವಿಸಿದೆ

**ದಿನಾಂಕ 11-11-2016**
**ಅಕ್ಕರಗೊಟ್ಟಿ**
**(ತಿಂಗಳ ಮುಕ್ತ ಸಾಂಸ್ಕೃತಿಕಚಿಂತನೆ)**
ವಿಷಯ:"ಆರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ" -ಅರ್ಥ ಸಾಧ್ಯತೆ
ಚಾಲನೆ : ಡಾ॥ ಪಿ.ವಿ. ನಾರಾಯಣ



ದಿನಾಂಕ 11-11-2016 ರಂದು ನಡೆದ ಅಕ್ಕರಗೊಟ್ಟಿ ಕಾರ್ಯಕ್ರಮದಲ್ಲಿ ಡಾ॥ ಪಿ.ವಿ.ನಾರಾಯಣ ಅವರು "ವಿಕ್ರಮಾರ್ಜನ ವಿಜಯ" ಅಶ್ವಾಸ,4, ಪದ್ಯ 30ರಲ್ಲಿ ಬರುವ 'ಆರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂಬ ಸಾಲಿನ ಅರ್ಥ ಸಾಧ್ಯತೆ ಕುರಿತಾದ ಚರ್ಚೆಗೆ ಚಾಲನೆ ನೀಡಿದರು. ಈ ಪದ್ಯದಲ್ಲಿ ವಸಂತೋತ್ಸವದ, ಶೃಂಗಾರದ ವರ್ಣನೆ ಮಾಡುತ್ತಿರುವ ಪಂಪನು ಕೊನೆಯ ಸಾಲಿನಲ್ಲಿ ತನಗೆ ಯಾ-ರೇ ಅಡ್ಡಿಯನ್ನುಂಟು ಮಾಡಿದರೂ, ತನ್ನ ಮನ ಬನವಾಸಿದೇಶವನ್ನು ನೆನೆಯುತ್ತದೆಂಬ ಹೇಳಿಕೆಯನ್ನು ನೀಡಿರುವ ಔಚಿತ್ಯವಾದರೂ ಏನು, ಎಂಬುದೇ ಜಿಜ್ಞಾಸೆಗೆ ಕಾರಣವಾಗಿದೆ.

ಈ ಪದ್ಯದಲ್ಲಿ ಸೂಚಿತವಾದ ಆಶಯವೆಂದರೆ, ಯಾವುದೇ ಸುಂದರ ಇಂದ್ರಿಯಾನುಭವವಾದಾಗಲು ಅದು ತನ್ನ ಮನಸ್ಸು ಬನವಾಸಿಯನ್ನು ನೆನಪಿಸುವ ಮೀಟುಗೋಲಾಗುತ್ತದೆ: ದಕ್ಷಿಣದಿಂದ ಬೀಸಿಬಂದ ಗಾಳಿ, ಒಳ್ಳೆಯ ಮಾತುಗಳು, ಇಂಪಾದ ಗಾಯನ, ರತಿಸುಖ, ವಸಂತೋತ್ಸವ ಇದರಲ್ಲಿ ಯಾವುದನ್ನೇ ಎದುರಾದರೂ ಮನಸ್ಸಿನಲ್ಲಿ ಬನವಾಸಿ ನೆನಪಿಗೆ ಬರುತ್ತದೆ. ಅಷ್ಟೇ ಏಕೆ, "ಆರಂಕುಸವಿಟ್ಟೊಡಂ ನೆನವುದೆನ ಮನಂ ಬನವಾಸಿ ದೇಶಮಂ" ಆದರೆ ಈ ವಾಕ್ಯದಲ್ಲಿ ಇದುವರೆಗೆ ಪಂಡಿತರು ಅರ್ಥೈಸಿರುವಂತೆ, ಯಾರಾದರೂ ನೆನಪಿಗೆ ಅಂಕುಶವಿಡುವ ಪ್ರಮೇಯ ಯಾಕೆ ಬರುತ್ತದೆ? ಹೀಗಾಗಿ "ಆರ್ ಎಂಬುದು ಸರ್ವ ನಾಮ'ವಾಗಿರದೆ ಅದು ಆ ಹೆಸರಿನ ಮರವೊಂದನ್ನು ಸೂಚಿಸುತ್ತದೆ; ಜೊತೆ-ಗೆ "ಆರಂಕುಸವಿಟ್ಟೊಡಂ" ಎಂಬುದನ್ನು "ಆರಂಕುರವಿಟ್ಟೊಡಂ" ಎಂದು ಊಹಾ ಪಾಠ ಮಾಡಿಕೊಂಡರೆ, ಆರ್ ಎಂದು ಸುಂದರವಾದ ಹೂ ಬರುವ ಮರವು ಚಿಗುರಿದಾಗ (ಅಂಕುರವಿಡು) ಸಹ ತನ್ನ ಮನಸ್ಸು ಬನವಾಸಿಯನ್ನು ನೆನಪಿಸಿಕೊಳ್ಳುತ್ತದೆ-ಎನ್ನುವಲ್ಲಿ ಯಾವುದೇ ಸುಂದರ ಸನ್ನಿವೇಶ ಬನವಾಸಿಯ ನೆನಪಿನ ಮೀಟುಗೋಲಾಗುತ್ತದೆ ಎಂಬ ಅರ್ಥಬರುತ್ತದೆ.

ಈ ಕುರಿತು ನಡೆದ ಅರ್ಥಪೂರ್ಣ ಚರ್ಚೆಯಲ್ಲಿ ಶ್ರೀ ಸುಬ್ರಮಣ್ಯ, ಶ್ರೀರಾಮಮೂರ್ತಿ, ಡಾ॥ ಲಕ್ಷ್ಮೀನಾರಾಯಣ, ಡಾ॥ ಎಂ.ಜಿ.ನಾಗರಾಜ್, ಪ್ರೊ ಶೇಷಗಿರಿರಾವ್, ಶ್ರೀ ರವೀಂದ್ರನಾಥ್, ಶ್ರೀ ವೆಂಕಟರಮಣಯ್ಯ, ಶ್ರೀಮತಿ ನಳಿನಿ ವೆಂಕಟೇಶ, ಶ್ರೀಮತಿ ಭಾರತಿ ಮುಂತಾದವರು ಭಾಗವಹಿಸಿದ್ದರು.

---

# ಸ್ವಚ್ಛ ಆರ್ಥಿಕ ಭಾರತ

- ಡಾ.ಅನಿಲ್ ಕುಮಾರ್.
ಉಪಪ್ರಾಂಶುಪಾಲರು
ಸಿಂಧಿ ವಾಣಿಜ್ಯಕಾಲೇಜು-ಹೆಬ್ಬಾಳ.

'ಹಣವನ್ನು ಕಂಡರೆ ಹೆಣವೂ ಬಾಯಿ ಬಿಡುತ್ತದೆ'ಎಂಬುದು ಗಾದೆ. ಹಣದ ಬಗೆಗಿನ ಮೋಹ, ವರ್ಣನೆಗೆ ಮೀರಿದ್ದು.
ಅರ್ಥಶಾಸ್ತ್ರಜ್ಞರು,"ಆಸೆಯಿಂದಲೆ ಅರ್ಥ ವ್ಯವಸ್ಥೆಯ ಅಭಿವೃದ್ಧಿ ಸಾಧ್ಯ" ಎಂದರೆ, ಬುದ್ಧನು 'ಆಸೆಯೇ ದು:ಖಕ್ಕೆ ಮೂಲ' ಎಂದನು. ಪ್ರಧಾನಮಂತ್ರಿ ಮೋದಿ ಅವರು ಹಳೆಯ ರೂ 500 ಮತ್ತು 1000 ಗಳನ್ನು ನಿಷೇಧಿಸಿದ ನಂತರ ಈ ಗಾದೆಗಳು ಹಲವಾರು ಬಾರಿ ನೆನಪಾಗುತ್ತಿವೆ. ಇರಲಿ, ಈಗ ಕೆಲ ಸಂದೇಹಗಳು ನಮ್ಮ ಮುಂದಿವೆ:

* ಸದ್ಯದಲ್ಲಿ ಹಳೆ /ಹೊಸ ನೋಟುಗಳ ಬದಲಾವಣೆಗೆ ಕಮಿಷನ್ ತೆಗೆದುಕೊಳ್ಳುತ್ತಿದ್ದಾರೆ ಎಂದು ಊಹಾಪೋಹಗಳಿವೆ. ಹಾಗಿದ್ದಲ್ಲಿ
* ಇದಕ್ಕೆಕಡಿವಾಣ ಹೇಗೆ?
* ಹಣವನ್ನು ಬೇರೆ ವಸ್ತುಗಳಿಗೆಮಾರ್ಪಾಡು ಮಾಡಲು ಬಳಸಿಕೊಳ್ಳುತ್ತಾರೆ ಎಂದೂ ವದಂತಿಯಿದೆ. ( ಉದಾ: ಚಿನ್ನ) ಅದು ನಿಜವಾಗಿದ್ದಲ್ಲಿ,
* ಅದರ ನಿಯಂತ್ರಣಹೇಗೆ?
* ಪ್ರತಿ ಸಣ್ಣ ವ್ಯವಹಾರವೂ ಬ್ಯಾಂಕಿನ ಮುಖಾಂತರವೇ ಆಗಬೇಕೇ?
* ಹಾಗಾದಲ್ಲಿ ಬ್ಯಾಂಕ್‌ಗಳು ದಾಖಲೆಗಳನ್ನು ಹೇಗೆ ನಿಭಾಯಿಸಬೇಕು?
* ಬ್ಯಾಂಕುಗಳ ತಂತ್ರಾಂಶಗಳು ಈ ಒತ್ತಡವನ್ನುತಡೆಯಬಲ್ಲವೇ?

ಒಂದು ಹೊಸ ವ್ಯವಸ್ಥೆಯ ಅಳವಡಿಕೆಯ ಸಮಯದಲ್ಲಿ ತೊಂದರೆಗಳು ಅನಿವಾರ್ಯ. ಮೇಲಿನ ಪ್ರಶ್ನೆಗಳು ಆರ್ಥಿಕ ವಿಷಯವೆನಿಸಿದರೂ, ಅವುಗಳ ಪ್ರಭಾವ ಸಮಾಜದ ಮೇಲೆ ಆಗುವದರಿಂದ ಪ್ರಜ್ಞಾವಂತರು, ವಿದ್ಯಾವಂತರು ಮತ್ತು ಬುದ್ಧಿಜೀವಿಗಳು ಈ ನಿಟ್ಟಿನಲ್ಲಿ ಯೋಚಿಸಬೇಕಾಗಿದೆ. ಕೆಲವೊಮ್ಮೆ ಸ್ವಂತಕ್ಕೆ ನಷ್ಟವಾದರೂ ಸಹ ಒಮ್ಮತದಿಂದ ಕಪ್ಪುಹಣದ ವಿರುದ್ಧವಾಗಿ ನಿಂತುಕೊಂಡು ಆದಷ್ಟು ಶೀಘ್ರದಲ್ಲಿ ನಮ್ಮ ಆರ್ಥಿಕ ವ್ಯವಸ್ಥೆ ಸಾಮಾನ್ಯ ಸ್ಥಿತಿಗೆ ಮರಳುವತ್ತ ಎಲ್ಲರೂ ಜವಾಬ್ದಾರಿಯುತವಾಗಿ ಭಾಗವಹಿಸಲಿ ಎಂದು ಆಶಿಸೋಣ.

**ಕೋರಿಕೆ :** ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ - ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/- ಮಾತ್ರ.ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

# ಅಂತರ್ಜಾಲದಲ್ಲಿ ಕನ್ನಡದಲ್ಲಿ ಲಭ್ಯವಿರುವ ಮಾಹಿತಿ ಎಷ್ಟು?

–ಬಿ. ಆರ್.ರವೀಂದ್ರನಾಥ

ಪ್ರತಿ ವರ್ಷ ನಾವು ಕರ್ನಾಟಕ ರಾಜ್ಯೋತ್ಸವವನ್ನು ಆಚರಿಸುವುದರಿಂದ ನಮಗೆ ಕನ್ನಡ ಹಾಗೂ ಕರ್ನಾಟಕದ ಪ್ರಗತಿ ಪಥದ ಸ್ಥಿತಿಗತಿಗಳನ್ನು ಅವಲೋಕನ ಮಾಡುವ ಒಂದು ಸದವಕಾಶ ಒದಗಿ ಬರುತ್ತದೆ. ಈ ಅವಕಾಶವನ್ನು ಬಳಸಿಕೊಂಡು ನಾವೆಲ್ಲರೂ ಈ ಬಗ್ಗೆ ಚಿಂತನೆ ನಡೆಸುವುದು ಸೂಕ್ತವಾಗಿರುತ್ತದೆ.

ಅಂತರ್ಜಾಲದಲ್ಲಿ ಕನ್ನಡದಲ್ಲಿ ಲಭ್ಯವಿರುವ ಮಾಹಿತಿ ಎಷ್ಟು ಎಂದು ಕುತೂಹಲ ಮೂಡಿ ಇದರ ಬಗ್ಗೆ ಅನ್ವೇಷಣೆ ಮಾಡಲು ಅಂತರ್ಜಾಲದಲ್ಲಿ ಲಭ್ಯವಿರುವ ಮುಕ್ತ ವಿಶ್ವಕೋಶವಾದ ವಿಕಿಪೀಡಿಯಾವನ್ನು ಪರಿಶೀಲಿಸಿದಾಗ ಕೆಲವು ಚಿಂತೆಗೀಡು ಮಾಡುವ ಅಂಶಗಳು ಕಂಡುಬಂದವು. ಇಂಗ್ಲೀಷ್ ಭಾಷೆಯಲ್ಲಿಯ ವಿಕಿಪೀಡಿಯಾ ಜಾಲತಾಣವನ್ನು 15ನೇ ಜನವರಿ 2001ರಂದು ಲಾಂಛನಗೊಳಿಸಲಾಯಿತು. ಇದರಲ್ಲಿ ಇಂದು 52,63,329 ಲೇಖನಗಳು ಪ್ರಕಟಗೊಂಡಿವೆ. ಎಲ್ಲಾ ಭಾಷೆಗಳಲ್ಲಿನ ಲೇಖನಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ 40 ಮಿಲಿಯ ಲೇಖನಗಳಿಗೂ ಹೆಚ್ಚು ಲೇಖನಗಳು ಲಭ್ಯವಿವೆ. ವಿಕಿಪಿಡಿಯಾ ಜಾಲತಾಣಗಳಿಗೆ ಪ್ರತಿ ತಿಂಗಳು 495 ಮಿಲಿಯ ಜನರು ಭೇಟಿ ನೀಡಿ ಸುಮಾರು 18 ಬಿಲಿಯ ಪುಟಗಳನ್ನು ವೀಕ್ಷಿಸುತ್ತಾರೆ.

ಕನ್ನಡದಲ್ಲಿ ವಿಕಿಪಿಡಿಯಾ ಪುಟಗಳು ಪ್ರಾರಂಭಗೊಂಡು ಬಹಳ ವರ್ಷಗಳು ಕಳೆದಿದ್ದರೂ ಪ್ರಸ್ತುತ ಬರೀ 3230 ಕಡತಗಳಲ್ಲಿ 20926 ವಿಷಯಗಳ ಬಗ್ಗೆ ಕೇವಲ 73446 ಪುಟಗಳು ಲಭ್ಯವಿವೆ. ಕೆಲವು ಪ್ರಮುಖ ವಿಷಯಗಳ ಬಗ್ಗೆ ಲಭ್ಯವಿರುವ ಮಾಹಿತಿಗಳು ಅತ್ಯಲ್ಪವಾಗಿರುವುದು ಆಶ್ಚರ್ಯ ಉಂಟು ಮಾಡುತ್ತದೆ. ಇತರ ದಕ್ಷಿಣ ಭಾರತದ ಭಾಷೆಗಳಲ್ಲಿನ ಪುಟಗಳು ದೀರ್ಘವಾಗಿದ್ದರೂ ಕನ್ನಡ ಭಾಷೆಯ ಪುಟಗಳಲ್ಲಿನ ಮಾಹಿತಿ ಅತ್ಯಲ್ಪ. ಉದಾಹರಣೆಗೆ ನಮ್ಮ ಭಾರತದ ಪರಂಪರೆಯಲ್ಲಿ ಹಾಸು ಹೊಕ್ಕಾಗಿರುವ ಬ್ರಹ್ಮ ಹಾಗೂ ವಿಷ್ಣು ಬಗ್ಗೆ ಒಂದು ವಾಕ್ಯ ವೃಂದ ಹಾಗೂ ಶಿವನ ಬಗ್ಗೆ ಕೇವಲ ಒಂದು ಪುಟದಷ್ಟು ಮಾತ್ರ ಮಾಹಿತಿ ಕನ್ನಡದ ಪುಟಗಳಲ್ಲಿ ಲಭ್ಯವಿವೆ. ಇನ್ನು ಬಹುತೇಕವಾಗಿ ವಿದ್ಯಾರ್ಥಿಗಳಿಗೆ ಬೇಕಾಗುವ ಮಾಹಿತಿಗಳು ಹೆಚ್ಚು ಲಭ್ಯವಿಲ್ಲ. ಉದಾಹರಣೆಗೆ ಮುಳ್ಳು ಹಂದಿಯ ಬಗ್ಗೆ ಕೇವಲ ಒಂದು ಸಾಲಿನಷ್ಟು ಮಾತ್ರ ಮಾಹಿತಿ ಇದ್ದರೆ ಹೇಸರುಗತ್ತೆ ಬಗ್ಗೆ ಒಂದು ವಾಕ್ಯ ವೃಂದದಷ್ಟು ಮಾಹಿತಿ ಇರುವುದು ಕಂಡು ಬಂದಿರುತ್ತದೆ. ಅಷ್ಟೇಕೆ, ವಿಕಿಪಿಡಿಯಾದ ಬಗ್ಗೆಯ ಚರಿತ್ರೆ ಪುಟಗಳು ತಮಿಳು ಹಾಗೂ ತೆಲುಗು ಭಾಷೆಯಲ್ಲಿ ಸಾಕಷ್ಟು ದೀರ್ಘವಾಗಿದ್ದರೂ ಕನ್ನಡ ಭಾಷೆಯ ಪುಟವನ್ನೇ ಪ್ರಾರಂಭಿಸಿರುವುದಿಲ್ಲ. ಹಾಗೆಯೇ ಪ್ಲಾಟಿಪಸ್, ತಿಮಿಂಗಲ, ಶಾರ್ಕ್‌ಗಳ ಬಗ್ಗೆ ತಮಿಳು, ತೆಲುಗು ಹಾಗೂ ಮಲಯಾಳಂ ಭಾಷೆಗಳು ಲಭ್ಯವಿವೆ ಆದರೆ ಕನ್ನಡದ ಪುಟಗಳನ್ನು ಪ್ರಾರಂಭಿಸಿಲ್ಲ. ಅದೇ ರೀತಿ ವಿಶ್ವ ಮಾನ್ಯ ಸಮಾಜ ವಿಜ್ಞಾನಿಯಾದ ಎಮಿಲ್‌ದರ್ಖೈಂ ಬಗ್ಗೆ ಹಿಂದಿ, ತಮಿಳು ಹಾಗೂ ತೆಲುಗು ಪುಟಗಳು ಲಭ್ಯವಿದ್ದರೂ ಕನ್ನಡದ ಪುಟಗಳನ್ನು ಪ್ರಾರಂಭಿಸಿಯೇ ಇಲ್ಲ. ಆಶ್ಚರ್ಯವೆಂದರೆ ದೆಹಲಿ ವಿಶ್ವವಿದ್ಯಾಲಯದ ಸಮಕಾಲೀನ ಭಾರತೀಯ ಸಮಾಜ ವಿಜ್ಞಾನಿ ಪದ್ಮ ಭೂಷಣ ಪ್ರೊಫೆಸರ್ ಎಮೆರಿಟಸ್ ಆಂಡ್ರಿ ಬೆಟೈಲ್ ಬಗ್ಗೆ ಯಾವುದೇ ಭಾರತೀಯ ಭಾಷೆಯ ಪುಟವಿಲ್ಲ.

ನಮ್ಮ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಸ್ಥಾಪಕರಾದ ಪ್ರೊ. ಎಂ. ವಿ. ಸೀತಾರಾಮಯ್ಯ ಅವರ ಬಗ್ಗೆ ಇಂಗ್ಲಿಷ್ ಆವೃತ್ತಿಯಲ್ಲಿ ಮೂರು ವಾಕ್ಯಗಳಷ್ಟು ಮಾಹಿತಿ ಇದೆ. ಇದರ ಕನ್ನಡ ಆವೃತ್ತಿ ಕೊಂಡಿಯನ್ನು ಕ್ಲಿಕ್ಕಿಸಿದಲ್ಲಿ ಅದು ಪ್ರೊ. ವಿ. ಸೀತಾರಾಮಯ್ಯ ಅವರ ಪುಟವನ್ನು ತಲುಪುತ್ತದೆ. ಇಷ್ಟಾಗಿ ಪ್ರೊ. ವಿ. ಸೀತಾರಾಮಯ್ಯ ಅವರ ಬಗ್ಗೆ ಕೇವಲ ಒಂದು ವಾಕ್ಯ ಮಾತ್ರ ಲಭ್ಯವಿದ್ದು ಉಳಿದ ಮಾಹಿತಿ ಎಂದರೆ ಅವರು ರಚಿಸಿದ ಕೃತಿಗಳ ಹೆಸರುಗಳು ಮಾತ್ರ. ವಿಕಿಪಿಡಿಯಾ ಕನ್ನಡದ ಪುಟಗಳಲ್ಲಿ ಅಥವಾ ಇನ್ನಾವುದೇ ಅಂತರ್ಜಾಲದ ಪುಟಗಳಲ್ಲಿ ಪ್ರೊ.ಎಂ ವಿ ಸೀತಾರಾಮಯ್ಯ ಅವರ ಬಗ್ಗೆ ಹಾಗೂ ಪ್ರೊ. ವಿ. ಸೀತಾರಾಮಯ್ಯ ಅವರ ಬಗ್ಗೆ ಮಾಹಿತಿಗಳು ಲಭ್ಯವಿಲ್ಲ.

ಇದಕ್ಕೆ ಪ್ರತಿಯಾಗಿ ಕನ್ನಡ ವಿಕಿಪಿಡಿಯಾದಲ್ಲಿ ನಿಮಗೆ "ಹಹೊಬ" ಎಂಬ ಎಣ್ಣೆಯ ಬಗ್ಗೆ ಸಾಕಷ್ಟು ವಿವರಗಳು ದೊರೆಯುತ್ತವೆ. ಜನ ಸಾಮಾನ್ಯರಿಗೆ ಹೆಚ್ಚು ಆಸಕ್ತಿ ಇರುವ, ನಮ್ಮ ದೇವರುಗಳಾದ ಬ್ರಹ್ಮ, ವಿಷ್ಣು ಮಹೇಶ್ವರ ಬಗ್ಗೆಯಾಗಲೀ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಬಹುದಾದ ಪ್ರಾಣಿ ಪಕ್ಷಿಗಳು ಮತ್ತು ವಿಜ್ಞಾನಿಗಳ ಬಗ್ಗೆ ಹೆಚ್ಚು ಮಾಹಿತಿ ನೀಡದ ಕನ್ನಡ ವಿಕಿಪೀಡಿಯಾ ಪುಟಗಳಲ್ಲಿ ಈ ಅಪರಿಚಿತ ವಿಷಯದ ಬಗ್ಗೆ ವಿವರವಾದ ಮಾಹಿತಿಯಾಕೆ ಲಭ್ಯವಿದೆ ಎಂದು ತಿಳಿಯುತ್ತಿಲ್ಲ. ವಿಕಿಪಿಡಿಯಾದಲ್ಲಿನ ಮಾಹಿತಿಗಳು ನಂಬಲರ್ಹವಾದದ್ದಲ್ಲ ಎಂಬ ಆಪಾದನೆಗಳು ಇರುವುದು ನಿಜ. ಅಂತಹ ಜಾಲತಾಣಕ್ಕೆ ನಾವು ಏಕೆ ಮಹತ್ವ ನೀಡಬೇಕು ಎಂಬ ನಿಲುವನ್ನು ಬಹಳಷ್ಟು ಜನರು ಹೊಂದಿರುತ್ತಾರೆ.

ಕಣಜ ಅಂತರಜಾಲ ಕನ್ನಡ ಜ್ಞಾನಕೋಶವನ್ನು ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸ್ಥಾಪಿಸಿ ನಿರ್ವಹಿಸುತ್ತಿದೆ. ಈ ಜಾಲತಾಣದಲ್ಲಿ 23109 ಲೇಖನ/ಪುಸ್ತಕ ಭಾಗಗಳಿವೆ. ಆದರೆ ಈ ಉದಾಹರಿತ ವಿಷಯಗಳ ಬಗ್ಗೆ ಕಣಜದಲ್ಲಿಯೂ ಯಾವ ಮಾಹಿತಿಯೂ ದೊರಕುತ್ತಿಲ್ಲ.

ಕನ್ನಡ ಭಾಷೆ ಕರ್ನಾಟಕ ರಾಜ್ಯದ ಅಧಿಕೃತ ಭಾಷೆ ಹಾಗೂ ಭಾರತದಲ್ಲಿ ಮಾನ್ಯತೆ ಪಡೆದಿರುವ 22 ಭಾಷೆಗಳ ಪೈಕಿ ಒಂದು. 2000 ವರ್ಷಗಳ ಇತಿಹಾಸವಿರುವ ಕನ್ನಡ ಭಾಷೆಯನ್ನು ಕರ್ನಾಟಕದ 6 ಕೋಟಿ ಜನರು ದೈನಂದಿನ ಜೀವನದಲ್ಲಿ ಬಳಸುತ್ತಾರೆ. ಬೆಂಗಳೂರು ನಗರ ಹಾಗೂ ಕರ್ನಾಟಕ, ರಾಜ್ಯ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಮಂಚೂಣಿಯಲ್ಲಿದ್ದು ಕನ್ನಡಿಗರು ವಿಶ್ವಾದ್ಯಂತ ಸೇವೆ ಸಲ್ಲಿಸುತ್ತಿದ್ದರೂ ಕನ್ನಡಿಗರು ಜ್ಞಾನಾರ್ಜನೆಗಾಗಿ ಅಂತರ್ಜಾಲದಲ್ಲಿ ಇಂಗ್ಲೀಷ್ ಪುಟಗಳನ್ನೇ ಆಶ್ರಯಿಸಬೇಕಾಗಿರುತ್ತದೆ.ಆದರೆ ಇಂಗ್ಲೀಷ್ ಭಾಷೆ ಭಾರತದಲ್ಲಿ ಸರಾಸರಿ ಶೇ.10 ರಷ್ಟು ಜನರಿಗೆ ಮಾತ್ರ ಗೊತ್ತಿರುವ ಕಾರಣದಿಂದ ಬಹುತೇಕ ಮಾಹಿತಿ ಕೊರತೆ ಆಳವಾದ ಪರಿಣಾಮ ಬೀರಬಹುದು.

ಸಾರ್ವತ್ರಿಕವಾಗಿ ಬಹುತೇಕ ವಿಷಯಗಳ ಬಗ್ಗೆ ತಿಳಿದುಕೊಳ್ಳಲು ಅಂತರ್ಜಾಲ ಪುಟಗಳನ್ನು ಆಶ್ರಯಿಸುತ್ತಿರುವ ಈ ಕಾಲಘಟ್ಟದಲ್ಲಿ ಅಗತ್ಯ ಮಾಹಿತಿಗಳು ಕನ್ನಡದ ಪುಟಗಳಲ್ಲಿ ದೊರಕದಿರುವುದು ದೊಡ್ಡ ಕೊರತೆಯಾಗಿರುತ್ತದೆ. ಕನ್ನಡದ ಓದುಗರು ಜ್ಞಾನ ವಂಚಿತರಾಗುತ್ತಿರಬಹುದು ಎಂದು ಈ ಉದಾಹರಣೆಗಳು ಸೂಚಿಸುತ್ತವೆ.

ಕನ್ನಡದ ಮಾಧ್ಯಮದಲ್ಲಿಯೇ ಶಿಕ್ಷಣ ನೀಡಬೇಕೆಂದು ಒತ್ತಾಯ ಮಾಡುತ್ತಿರುವ ಹಂತದಲ್ಲಿ ಕನ್ನಡ ಮಾಧ್ಯಮದಲ್ಲಿ ಮಾಹಿತಿಗಳನ್ನು ಲಭ್ಯಗೊಳಿಸಲು ನಾವು ಮಾಡಿಕೊಂಡಿರುವ ಸಿದ್ದತೆಗಳೇನು ಎಂದು ಚಿಂತನೆ ಮಾಡಬೇಕಿದೆ. ಕರ್ನಾಟಕದ ಏಕೀಕರಣವಾಗಿ 60 ವರ್ಷಗಳಾಗಿರುವ ಈ ಸಂದರ್ಭದಲ್ಲಿ ಕನ್ನಡ ಆಡಳಿತ ಭಾಷೆಯಾಗುತ್ತಿರುವಾಗ ಈ ರೀತಿಯ ಮಾಹಿತಿ ಕೊರತೆಯನ್ನು ನೀಗಿಸಲು ಏನು ಮಾಡಬೇಕು ಎಂಬುದರ ಬಗ್ಗೆ ವ್ಯವಸ್ಥಿತ ಯೋಜನೆಗಳು ಸಿದ್ಧಗೊಳಿಸಬೇಕಾಗಿದೆ.



ಶ್ರೀಮತಿ ಕಮಲಿನಿ ಬಾಲೂರಾವ್ ಅವರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಎರಡು ಪ್ರಶಸ್ತಿಗಳು 'ಶಾ ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ' ಮತ್ತು 'ಶಾ ಬಾಲೂರಾವ್ ಅನುವಾದ ಪ್ರಶಸ್ತಿ' . ದಿವಂಗತ ಶ್ರೀ ಶಾ. ಬಾಲೂರಾವ್ ಅವರು ಪ್ರಖ್ಯಾತ ಸಾಹಿತಿಗಳಾಗಿದ್ದವರು. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳೆರಡರಲ್ಲಿಯೂ ಮೌಲಿಕವಾದ ಬರವಣಿಗೆಯನ್ನು ಮಾಡಿದವರು. ಸ್ವತಂತ್ರವಾಗಿ ಕಥೆಗಳನ್ನೂ ಬರೆದದ್ದಲ್ಲದೆ ಅನುವಾದವನ್ನೂ ಮಾಡಿದವರು. ಬಂಗಾಳಿ ಮತ್ತು ರಷ್ಯನ್ ಭಾಷೆಗಳಿಂದ ನೇರವಾಗಿ ಕಥೆಗಳನ್ನು, ಕವಿತೆಗಳನ್ನು ಅನುವಾದ ಮಾಡಿರುವುದು ಶಾ. ಬಾಲೂರಾವ್ ಅವರ ಹೆಗ್ಗಳಿಕೆ. ಈ ಎರಡೂ ಪ್ರಶಸ್ತಿಗಳು ಅವರಿಗೆ ಪ್ರಿಯವಾಗಿದ್ದ ಸಾಹಿತ್ಯ ಕೃಷಿಗೆ ಅವರ ನೆನಪಿನಲ್ಲಿ ಶ್ರೀಮತಿ ಕಮಲಿನಿಯವರು ಸ್ಥಾಪಿಸಿರುವಂತಹವು.

**ಪರಿಚಯ**

**ಸತ್ಯಮಂಗಲ ಮಹದೇವ**



1983 ರಲ್ಲಿ ಜನಿಸಿರುವ ಸತ್ಯಮಂಗಲ ಮಹದೇವ ಪದವಿ ವಿದ್ಯಾರ್ಥಿ ದಿಸೆಯಲ್ಲಿ ಕಾವ್ಯರಚನೆಯಲ್ಲಿ ತೊಡಗಿಕೊಂಡ ಇವರಿಗೆ 2003 ರಲ್ಲಿ ಪ್ರೊ.ಜಿ.ಶ್ರೀನಿವಾಸರಾಜು ಅವರ ಸಾಹಿತ್ಯ ಪರಿಚಾರಿಕೆಯಲ್ಲಿ ಕ್ರೈಸ್ಟ್ ಕಾಲೇಜು ಕನ್ನಡ ಸಂಘ ಅಂತರ ಕಾಲೇಜು ಕವನ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಕೊಡಮಾಡುವ "ಡಾ. ದ.ರಾ ಬೇಂದ್ರೆ ಸ್ಮೃತಿ ಪ್ರಶಸ್ತಿ" ಹಾಗೂ 2015 ನೇ ಸಾಲಿನ 'ಸಂಚಯ ಸಾಹಿತ್ಯ ಪ್ರಶಸ್ತಿ', ಡಾ. ಬಿ.ಶ್ಯಾಮಸುಂದರ್ ಪ್ರಶಸ್ತಿ, ಮುಳ್ಳೂರು ನಾಗರಾಜ್ ಕಾವ್ಯಪ್ರಶಸ್ತಿ, ಹಾಗೂ ಶಿವಮೊಗ್ಗ ಕನ್ನಡ ಸಂಘ ಕೊಡಮಾಡುವ ಡಾ.ಜಿ.ಎಸ್.ಶಿವರುದ್ರಪ್ಪ ಕಾವ್ಯ ಪ್ರಶಸ್ತಿ.ದೊರೆತಿದೆ.

2005 ರಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ 'ಭಾವತೀರದ ಹಾದಿಯಲ್ಲಿ' ನಂತರ 2011 ರಲ್ಲಿ 'ಹೆಜ್ಜೆ ಮೂಡಿದ ಮೇಲೆ' 2015 ರಲ್ಲಿ'ಯಾರ ಹಂಗಿಲ್ಲ ಬೀಸುವ ಗಾಳಿಗೆ' ಎಂಬ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ರಾಜ್ಯ ಹಾಗೂ ರಾಷ್ಟ್ರಮಟ್ಟದ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿದ್ದಾರೆ. ಕಾವ್ಯ ಕೃಷಿಯಜೊತೆಗೆ ವಿದ್ಯಾರ್ಥಿ ದಿಸೆಯಿಂದ ಎಡಪಂಥೀಯ ಚಳುವಳಿಗಳಲ್ಲಿ ಸಕ್ರೀಯರಾಗಿದ್ದ ಇವರು ಜೀವನಪರ ಮೌಲ್ಯಗಳನ್ನು ತಮ್ಮ ಬರಹ ಮತ್ತು ಬದುಕಿನಲ್ಲಿ ಅಳವಡಿಸಿಕೊಂಡಿದ್ದಾರೆ. ಇವರ ಕವನ, ಲೇಖನಗಳು ನಾಡಿನ ಪ್ರಸಿದ್ಧ ಮಾಸಪತ್ರಿಕೆ ಮಯೂರ, ದಿನಪತ್ರಿಕೆಗಳಾದ ಪ್ರಜಾವಾಣಿ, ವಿಜಯವಾಣಿ, ಕನ್ನಡ ಪ್ರಭ ಮತ್ತು ಸಾಹಿತ್ಯ ಪತ್ರಿಕೆ ಸಂವಾದ, ಸಂಚಯ, ಧರಣಿಮಂಡಲ ಸೇರಿದಂತೆ ಹಲವಾರು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಹಾಗೂ ಆಂಗ್ಲ ಭಾಷೆಗೆ ಕೆಲವು ಪದ್ಯಗಳು ಭಾಷಾಂತರಗೊಂಡಿವೆ.

'ಅಜಿತ ಪ್ರಿಯ ಮಹಾದೇವ' ಅಂಕಿತ ನಾಮದಿಂದ ಆಧುನಿಕ ವಚನಗಳ ರಚನೆಯಲ್ಲಿಯೂ ತೊಡಗಿಸಿಕೊಂಡಿರುವ ಇವರು ಎಂ.ಎಸ್ಸಿ ಮನೋವಿಜ್ಞಾನ ಮತ್ತು ಎಂ.ಎ. ಕನ್ನಡ ಪದವಿ ಪಡೆದಿದ್ದು ಪ್ರಸ್ತುತರೇವ ವಿಶ್ವವಿದ್ಯಾಲಯ, ಯಲಹಂಕ, ಬೆಂಗಳೂರು, ಇಲ್ಲಿ ಪಿ.ಹೆಚ್.ಡಿ ಸಂಶೋಧನಾ ವಿದ್ಯಾರ್ಥಿಯಾಗಿ, ಬಿ.ಎನ್.ಇ.ಎಸ್. ಪದವಿ ಕಾಲೇಜು ಮಹಾಲಕ್ಷ್ಮಿ ಪುರಂ, ಬೆಂಗಳೂರು ಇಲ್ಲಿ ಕನ್ನಡ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**ಪರಿಚಯ**

**ವಸುಧೇಂದ್ರ**



ಬಳ್ಳಾರಿ ಜಿಲ್ಲೆಯ ಸಂಡೂರಿನಲ್ಲಿ 1969ರಲ್ಲಿ ಜನಿಸಿ NITK ಸೂರತ್ಕಲ್‌ನಿಂದ BE ಮತ್ತು IISc ಬೆಂಗಳೂರಿನಿಂದ ME ಪದವಿ ಪಡೆದು 20 ವರ್ಷಗಳ ಕಾಲ ಸಾಫ್ಟ್‌ವೇರ್ ಪ್ರಪಂಚದಲ್ಲಿ ಕೆಲಸ ಮಾಡಿ, ಈಗ ತಮ್ಮ ಸಮಯವನ್ನು ಪ್ರವಾಸ, ಓದು ಮತ್ತು ಬರಹಗಳಲ್ಲಿ ವಿನಿಯೋಗಿಸುತ್ತಾರೆ.

ಕತೆ ಮತ್ತು ಪ್ರಬಂಧ ಕ್ಷೇತ್ರದಲ್ಲಿ 16 ಪುಸ್ತಕಗಳನ್ನು ಪ್ರಕಟಿಸಿರುವ ಇವರ ಪುಸ್ತಕಗಳು ಹಲವಾರು ಮರು ಮುದ್ರಣಗಳನ್ನು ಕಂಡಿವೆ. 'ನಮ್ಮಮ್ಮ ಅಂದ್ರೆ ನಂಗಿಷ್ಟ' ಎನ್ನುವ ಇವರ ಕೃತಿ 16 ಮುದ್ರಣಗಳನ್ನು ಕಂಡಿದೆ.

ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಸ್ತಕ ಬಹುಮಾನ, ದ.ರಾ.ಬೇಂದ್ರೆ ಕಥಾ ಪ್ರಶಸ್ತಿ, ಮಾಸ್ತಿ ಕಥಾ ಪುರಸ್ಕಾರ, ಡಾ.ಯು.ಆರ್.ಅನಂತಮೂರ್ತಿ ಪ್ರಶಸ್ತಿ, ಬೆಸಗರಹಳ್ಳಿ ರಾಮಣ್ಣ ಪ್ರಶಸ್ತಿ, ವಸುದೇವ ಭೂಪಾಲಂ ದತ್ತಿ ಪ್ರಶಸ್ತಿ, ವರ್ಧಮಾನ ಉದಯೋನ್ಮುಖ ಪ್ರಶಸ್ತಿ, ಸೇಡಂನ ಅಮ್ಮ ಪ್ರಶಸ್ತಿ ಮತ್ತು ಕಥಾರಂಗಂ ಪ್ರಶಸ್ತಿಗಳನ್ನು ಪಡೆದಿದ್ದಾರೆ. 'ಛಂದಪುಸ್ತಕ' ಎಂಬ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿ, ಅದರ ಮೂಲಕ ನಾಡಿನ ಹಲವಾರು ಹೊಸ ಬರಹಗಾರರ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಆ ಪುಸ್ತಕಗಳ ಜೊತೆಗೆ, ತಮ್ಮ ಪುಸ್ತಕಗಳ ಮುದ್ರಣ ಮತ್ತು ಮಾರಾಟವನ್ನು ಸ್ವತಃ ನೋಡಿಕೊಳ್ಳುತ್ತಾರೆ.

ಚಾರಣದಲ್ಲಿ ಆಸಕ್ತಿಯಿರುವ ಇವರು ನಮ್ಮ ಪಶ್ಚಿಮ ಘಟ್ಟದ ಕಾಡಿನಲ್ಲಿರುವ ಹಲವು ಬೆಟ್ಟಗಳನ್ನೂ, ತಾಂಜಾನಿಯಾ ದೇಶದಲ್ಲಿರುವ ಕಿಲಿಮಂಜಾರೋ ಪರ್ವತವನ್ನೂ, ಕೈಲಾಶ ಪರ್ವತದ ಪರಿಕ್ರಮವನ್ನೂ ಮತ್ತು ಹಿಮಾಲಯದ ಹಲವು ಪರ್ವತಗಳನ್ನೂ ಹತ್ತಿದ್ದಾರೆ. ಸ್ಕ್ವಾಷ್ ಆಟ, ಮಹಾಭಾರತದ ಓದು, ಶಾಸ್ತ್ರೀಯ ಸಂಗೀತವನ್ನು ಕೇಳುವುದು ಅವರ ಇತರ ಹವ್ಯಾಸಗಳಾಗಿವೆ. ಓದಿಗೆ ಅಡ್ಡಿಪಡಿಸುವ ಟಿವಿ ನೋಡುವುದಿಲ್ಲವೆಂದು ಹದಿನೈದು ವರ್ಷಗಳಹಿಂದೆನಿರ್ಧರಿಸಿ, ಅದರಂತೆ ನಡೆದು ಕೊಳ್ಳುತ್ತಿದ್ದಾರೆ!

**ಡಿಸೆಂಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು**

| | |
|---|---|
| ವ್ಯಾಸರಾಯ ಬಲ್ಲಾಳ | 1-12-1923 |
| ಜಿ ಪಿ ರಾಜರತ್ನಂ | 5-12-1908 |
| ಶಾಂತಾದೇವಿ ಮಾಳವಾಡ | 10-12-1922 |
| ಜಯಲಕ್ಷ್ಮಿ ಶ್ರೀನಿವಾಸನ್ | 12-12-1911 |
| ಯು ಆರ್ ಅನಂತಮೂರ್ತಿ | 21-12-1933 |
| ಎಸ್.ವಿ. ರಂಗಣ್ಣ | 24-12-1898 |
| ದೇವುಡು | 27-12-1897 |
| ಕುವೆಂಪು | 29-12-1904 |

**ಡಿಸೆಂಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು**

| | |
|---|---|
| ಆರ್. ನರಸಿಂಹಚಾರ್ | 6-12-1936 |
| ಶಿವರಾಮ ಕಾರಂತ | 9-12-1997 |
| ಫರ್ಡಿನಾಂಡ್ ಕಿಟೆಲ್ | 19-12-1903 |
| ಶಿಶಿ ಬಸವನಾಳ | 22-12-1951 |
| ಮಿರ್ಜಿಅಣ್ಣಾರಾಯ | 23-12-1975 |
| ಜಿ.ಬಿ. ಜೋಶಿ | 25-12-1993 |

# ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ಕನಕವೆಂದರೆ ಚಿನ್ನ, ಕನಕದಾಸರೆಂದರೆ ಚಿನ್ನ,
ಕವಿ– ದಾಸವರೇಣ್ಯ ಖ್ಯಾತಿಯ ಚಿನ್ನ,
ಕ್ರಾಂತಿ ಕಹಳೆ ಮೊಳಗಿಸಿದ ಚಿನ್ನ,
'ಕನಕ ಚಿನ್ನ'ಎಂಬುದು'ಕೃಷ್ಣದರ್ಶನವ' ನೀಡಿದ್ದು ಚಿನ್ನ,
ಉತ್ತಮಾಧಮರೆಂಬ ಪರದೆ ಹರಿದೊಗೆದ ಚಿನ್ನ,
ಕೀರ್ತನೆ ಕುಂಭದೊಳಗೆ ಸಮಾಜ– ನೈತಿಕತೆ–
ಕಾವ್ಯಾಮೃತವತುಂಬಿದ ಭಕ್ತಾಗ್ರೇಸರ ಚಿನ್ನ,
ಇಂಥಚಿನ್ನಚಿಣ್ಣನಲ್ಲವಯ್ಯಾ! ॥14॥

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

**ಕಾಡು೧:** ಮುಖ್ಯ ದ್ರಾವಿಡ ಭಾಷೆಗಳಲ್ಲೆಲ್ಲ ಈ ರೂಪವೇ ಇರುವ ಈ ಶಬ್ದಕ್ಕೆ ಅಡವಿ ಎಂಬುದು ಅರ್ಥ. 'ಶಬ್ದಮಣಿ ದರ್ಪಣ'ವು ಕ್ರಿಯಾರ್ಥವನ್ನು ಕೊಡುವುದರ ಜೊತೆಗೆ "ಕಾಡು– .. ..ಅರಣ್ಯೇಚ" ಎಂದು ಹೇಳುತ್ತದೆ. "ವಿಯೋಗಿ ಜನಕ್ಕೆ ಬೇಟಮಂ ಬಳೆವುದು ನಾಡ ಕಾಡ ಬೆಳಸಿಂ ಬೆಳಸಾ ವಿಷಯಾಂತರಾಳದೊಳ್" ಎಂಬುದು 'ಪಂಪಭಾರತ'ದ ಮಾತು. "ಕೆಲವು ವಾಯಸಂಗಳ್ ಬಿಜೆತೋಡಿ ಕಾಡೊಳ್ಕೂಡಿರ್ದುವೆಲ್ಲಂ ಬಂದು" ಎಂಬುದು 'ಪಂಚತಂತ್ರ'ದಲ್ಲಿನ ಮಾತು. "ಕಱುಬರಿದ್ದೂಡೆಂದೆ ಕಾಡೊಳ್ಳಿತು" ಎಂಬುದು 'ಜೈಮಿನಿ ಭಾರತ'ದಲ್ಲಿನ ವಾಕ್ಯ.

ಕಾಡಿನಲ್ಲಿನ ಪ್ರಾಣಿಗಳು ಕಾಡುಮೃಗಗಳು."ಅರಸಂ ಕಾಡಾನೆಯಂ ಪಿಡಿಯಲ್ವೆದಿ" ಎಂಬ ಮಾತು 'ವಡ್ಡಾರಾಧನೆ'ಯಲ್ಲಿ ಬರುತ್ತದೆ."ಬಾಟೀಯ ಚೆಲ್ವನಪ್ಪ ಬನಮಂ ಕಾಡಾನೆ ಪೊಕ್ಕಂತೆ" ಎಂಬುದು 'ಪಂಪಭಾರತ'ದಲ್ಲಿನ ಗಾದೆ. ಕೃಷಿ ಮಾಡದೆ ತಾವಾಗಿ ತಾನಾಗಿ ಬೆಳೆದ ಸಸ್ಯಗಳು ಕಾಡುಸಸ್ಯಗಳು.ಕಾಡರಳೆ, ಕಾಡಮಾದಲ, ಕಾಡಮಲ್ಲಿಗೆ, ಕಾಡವರೆ ಇತ್ಯಾದಿ."ವನಪೂರ ಬೀಜಕಃ– ಕಾಡಮಾದಲ" ಎನ್ನುತ್ತದೆ 'ಒಷಧಿಕೋಶ'."ಕಾಡವರೆ ಮಣಲು ಸುಣ್ಣಮೀ ವೀಡಿತ ವಜ್ರೋಪಮಾನ ತಿವುರೆನಿಸಿರ್ಕುಂ" ಎಂದು 'ಖಗೇಂದ್ರಮಣಿದರ್ಪಣ'ವು ವಿಷಚಿಕಿತ್ಸೆಯ ಸಂದರ್ಭದಲ್ಲಿ ಹೇಳುತ್ತದೆ. "ಹಿತ್ತಿಲಲ್ಲಿ ಬೆಳೆದಿದ್ದಾವೆ ಕಾಡು ಗಿಡಗಂಟಿ ಮೆಳೇ" ಎಂಬುದು ಗಂಗಾಧರ ಚಿತ್ತಾಲರ ಕವನವೊಂದರ ಸಾಲು.

ಕಾಡು–ನಾಡು ಒಂದು ಬಗೆಯ ವಿರುದ್ಧಾರ್ಥದ ಜೋಡಿಶಬ್ದ. ಕಾಡು ಎಂಬುದು ಒರಟು, ಅನಾಗರಿಕ ಎಂಬ ಅರ್ಥವನ್ನು ಹೊಂದುತ್ತದೆ.ಅನಾಗರಿಕ ಪರಾಕ್ರಮವನ್ನು 'ಶ್ರೀ ರಾಮಾಯಣ ದರ್ಶನಂ'ನಲ್ಲಿ 'ಕಾಡದಟು' ಎನ್ನಲಾಗಿದೆ ("ನಮಗೀಗಳೇಕೀ ಕಪಿಧ್ವಜರ ಕಾಡದಟಿನೊಂದು ಹಂಗು?"). ಕಾಡುಮನುಷ್ಯನನ್ನು ಮುದ್ದಣನ 'ರಾಮಾಶ್ವಮೇಧ'ವು ಕಾಡಾಡಿ ಎನ್ನುತ್ತದೆ: "ಕಾಡಾಡಿರಾಯನೊಂದು ಗೆಯ್ಮೆಯಂ."

ಭೂಮಿ ಎಂಬ ಅರ್ಥವೂ ಈ ಶಬ್ದಕ್ಕಿದೆ. "ಐವತ್ತು ಮತ್ತರ್ ಕೆಸುಕಾಡುಂ ಕೀಲ್ಕಿಱಿ ಮೂವತ್ತಿರ್ಮಡಿ ಕಾಡುಂ" ಎಂಬ ಮಾತು ಒಂಬತ್ತನೆಯ ಶತಮಾನದ ಶಾಸನವೊಂದರಲ್ಲಿ ಬಂದಿದೆ. ಇಲ್ಲಿನ ಕೆಸುಕಾಡು ಎಂಬುದಕ್ಕೆ ಕಿಸುಕಾಡು ಅಥವಾ ಕಿಸುಗಾಡು [ಕೆಚ್ಚನೆಯ ಕಾಡು] ಎಂಬ ಪರ್ಯಾಯ ರೂಪವೂ ಇದೆ: "ಕಿಸುಗಾಡ ನೆಲಂಗಳ್ ಎಳದಳಿರ ಬಣ್ಣಮಂ ಕೆಯ್ಕೊಂಡು" ('ಪಂಪಭಾರತ'). 'ಕಾಡಾರಂಬ' ಅಥವಾ 'ಕಾಡಾರಂಭ' ಎಂಬುದು ಕುಷ್ಕಿ ಜಮೀನಿಗೆ ಅನ್ವಯಿಸುತ್ತಿದ್ದ ಹೆಸರು: "ಚತುಸ್ಸೀಮೆವೊಳಗಾದ .. ..ಕಾಡಾರಂಭ ನೀರಾರಂಭ"ಗಳ ಪ್ರಸ್ತಾಪ ಶಾಸನವೊಂದರಲ್ಲಿದೆ.(ನೀರಾರಂಭ ಎಂದರೆ ನೀರಾವರಿ). ಇವುಗಳ ಮೇಲಿನ ತೆರಿಗೆಯನ್ನೂ ಈ ಹೆಸರುಗಳಿಂದಲೇ ಕರೆಯುತ್ತಿದ್ದರೆಂಬುದಕ್ಕೂ ಶಾಸನಾಧಾರಗಳಿವೆ: "ಬಾಲಗೆರೆ ಮಗ್ಗದೆರೆ ಕಾಡಾರಂಬ ನೀರಾರಂಬ" ಎಂಬುದು ಹದಿನೈದನೆಯ ಶತಮಾನದ ಶಾಸನವೊಂದರ ಪ್ರಯೋಗ.

=====

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of Posting :30-11-2016**

## ೨೦೧೬ ನವೆಂಬರ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾಕಾರ್ಯವು ನಡೆಯುತ್ತಿದೆ. ೨೦೧೬ರ ನವೆಂಬರ್ ತಿಂಗಳಿನಲ್ಲಿ ೬೪ ಗ್ರಂಥಗಳ ಶುಷ್ಕ ಶುದ್ಧೀಕರಣ, ೬೪ ಗ್ರಂಥಗಳಿಗೆ ತೈಲ/ ಮಸಿ ಲೇಪನ ಕಾರ್ಯ, ೬೪ ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, ೨೦ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೨ ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ , ಮತ್ತು ೧೨ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ, ೪೦೦ ಪುಟಗಳಿಗೆ ಸ್ಕಾನಿಂಗ್ ಮಾಡಲಾಗಿದೆ.

## ಬೆಸುಗೆಯ ಬಂಧನದಲ್ಲಿ ಕಾದಂಬರಿ ಲೋಕಾರ್ಪಣೆ

ದೇಸಿ ಪುಸ್ತಕ ಪ್ರಕಟಿಸಿರುವ ಖ್ಯಾತ ಲೇಖಕಿ ಡಾ.ವಿಜಯ ಸುಬ್ಬರಾಜ್ ರವರ ಬಾ ಮತ್ತು ಬಾಪು ದಾಂಪತ್ಯ ಕಥನದ ಬೆಸುಗೆಯ ಬಂಧನದಲ್ಲಿ ಕಾದಂಬರಿಯ ಲೋಕಾರ್ಪಣೆಯು ಗಾಂಧಿ ತತ್ವ ಪ್ರಸರಣಕ್ಕೆ ಮೀಸಲಾದ ಅಮರ ಬಾಪು ಚಿಂತನ ದ್ವೈಮಾಸಿಕ ಪತ್ರಿಕೆ ಮತ್ತು ಸೃಷ್ಟಿ ಕಲ್ಚರಲ್ ಫೌಂಡೇಷನ್ ಸಂಯುಕ್ತಾಶ್ರಯದಲ್ಲಿ ನಗರದ ಚಾಮರಾಜಪೇಟೆಯ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ನಡೆಯಿತು.

ಸಮಾರಂಭವನ್ನು ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ಹೆಚ್.ಎಸ್.ದೊರೆಸ್ವಾಮಿ ಉದ್ಘಾಟಿಸಿದರು.ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ ಪುಸ್ತಕ ಲೋಕಾರ್ಪಣೆ ಮಾಡಿದರು.

ಸುಮಂಗಲಿ ಸೇವಾಶ್ರಮದ ಅಧ್ಯಕ್ಷರಾದ ಎಸ್.ಜಿ.ಸುಶೀಲಮ್ಮ ಮುಖ್ಯಅತಿಥಿಗಳಾಗಿ ಆಗಮಿಸಿದ್ದ ಕಾರ್ಯಕ್ರಮದಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ವೂಡೇ ಪಿ. ಕೃಷ್ಣರವರು ಅಧ್ಯಕ್ಷತೆ ವಹಿಸಿದ್ದರು ಅಮರ ಬಾಪು ಚಿಂತನ ಸಂಪಾದಕ ಜೀರಿಗೆ ಲೋಕೇಶ್ ಮತ್ತು ಸೃಷ್ಟಿ ಕಲ್ಚರಲ್ ಫೌಂಡೇಷನ್‌ನ ಅಧ್ಯಕ್ಷರಾದ ಸೃಷ್ಟಿ ನಾಗೇಶ ಉಪಸ್ಥಿತರಿದ್ದರು. ವಿವರಗಳಿಗೆ : **9448042653**

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ..........................................................................................

..........................................................................................

..........................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೪೮೭೭